# ಕರ್ನಾಟಕ ವಿಧಾನಸಭೆ

(15ನೇ ವಿಧಾನಸಭೆ)
ಮೂರನೇ ಅಧಿವೇಶನ

## ಕಾರ್ಯಕಲಾಪಗಳ ಪಟ್ಟಿ

ಗುರುವಾರ, ದಿನಾಂಕ 14ನೇ ಫೆಬ್ರವರಿ, 2019
(ಸಮಯ: ಬೆಳಿಗ್ಗೆ 11.00 ಗಂಟೆಗೆ)

----

### 1. ವರದಿಗಳನ್ನೊಪ್ಪಿಸುವುದು

1. **ಶ್ರೀ ಎಂ.ಕೃಷ್ಣಾರೆಡ್ಡಿ** (ಮಾನ್ಯ ಉಪ ಸಭಾಧ್ಯಕ್ಷರು ಹಾಗೂ ಅಧ್ಯಕ್ಷರು, ಸದಸ್ಯರುಗಳ ಖಾಸಗಿ ವಿಧೇಯಕಗಳ ಮತ್ತು ನಿರ್ಣಯಗಳ ಸಮಿತಿ) ಅವರು 2018-19ನೇ ಸಾಲಿನ ಸದಸ್ಯರುಗಳ ಖಾಸಗಿ ವಿಧೇಯಕಗಳ ಮತ್ತು ನಿರ್ಣಯಗಳ ಸಮಿತಿಯ ಮೂರನೇ ವರದಿಯನ್ನೊಪ್ಪಿಸುವುದು.

2. **ಶ್ರೀ ಕೆ.ಜಿ.ಬೋಪಯ್ಯ** (ಅಧ್ಯಕ್ಷರು, ಸಭೆಯ ಮುಂದಿಡಲಾದ ಕಾಗದ ಪತ್ರಗಳ ಸಮಿತಿ) ಅವರು 2018-19ನೇ ಸಾಲಿನ ಸಭೆಯ ಮುಂದಿಡಲಾದ ಕಾಗದ ಪತ್ರಗಳ ಸಮಿತಿಯ 34ನೇ ವರದಿಯನ್ನೊಪ್ಪಿಸುವುದು.

3. **ಶ್ರೀ ಆರ್.ಅಶೋಕ** (ಅಧ್ಯಕ್ಷರು, ಸಾರ್ವಜನಿಕ ಲೆಕ್ಕಪತ್ರಗಳ ಸಮಿತಿ) ಅವರು 2018-19ನೇ ಸಾಲಿನ ಸಾರ್ವಜನಿಕ ಲೆಕ್ಕಪತ್ರಗಳ ಸಮಿತಿಯ ಮೊದಲನೇ ವರದಿಯನ್ನೊಪ್ಪಿಸುವುದು.

4. **ಶ್ರೀ ಎ.ಟಿ.ರಾಮಸ್ವಾಮಿ** (ಅಧ್ಯಕ್ಷರು, ಸರ್ಕಾರಿ ಭರವಸೆಗಳ ಸಮಿತಿ) ಅವರು 2018-19ನೇ ಸಾಲಿನ ಸರ್ಕಾರಿ ಭರವಸೆಗಳ ಸಮಿತಿಯ ಎರಡನೇ ಮತ್ತು ಮೂರನೇ ವರದಿಗಳನ್ನೊಪ್ಪಿಸುವುದು.

5. **ಶ್ರೀ ಬಿ.ಕೆ.ಸಂಗಮೇಶ್ವರ್** (ಅಧ್ಯಕ್ಷರು, ಕರ್ನಾಟಕ ವಿಧಾನ ಮಂಡಲದ ಸ್ಥಳೀಯ ಸಂಸ್ಥೆಗಳ ಮತ್ತು ಪಂಚಾಯತ್ ರಾಜ್ ಸಂಸ್ಥೆಗಳ ಸಮಿತಿ) ಅವರು 2018-19ನೇ ಸಾಲಿನ ಕರ್ನಾಟಕ ವಿಧಾನ ಮಂಡಲದ ಸ್ಥಳೀಯ ಸಂಸ್ಥೆಗಳ ಮತ್ತು ಪಂಚಾಯತ್ ರಾಜ್ ಸಂಸ್ಥೆಗಳ ಸಮಿತಿಯ ಇಪ್ಪತ್ತೇಳನೇ ವರದಿಯನ್ನೊಪ್ಪಿಸುವುದು.

**... 2/ ..**

## 2. ಅರ್ಜಿಗಳನ್ನೊಪ್ಪಿಸುವುದು

**ಶ್ರೀ ಎಂ. ಕೃಷ್ಣಾರೆಡ್ಡಿ,** (ಮಾನ್ಯ ಉಪ ಸಭಾಧ್ಯಕ್ಷರು ಹಾಗೂ ಅಧ್ಯಕ್ಷರು, ಅರ್ಜಿಗಳ ಸಮಿತಿ) ಅವರು ಈ ಕೆಳಕಂಡ ಅರ್ಜಿಗಳನ್ನು ಒಪ್ಪಿಸುವುದು:

1) ಬೆಂಗಳೂರು ನಗರದ ಪಾಪರೆಡ್ಡಿಪಾಳ್ಯ ವಾರ್ಡ್ ನಂ.129ಕ್ಕೆ ಮೂಲಭೂತ ಸೌಕರ್ಯಗಳನ್ನು ಕಲ್ಪಿಸುವ ಬಗ್ಗೆ.
2) ಕೊಡಗು ಜಿಲ್ಲಾ ಶಿಕ್ಷಕರ ಪತ್ತಿನ ಸಹಕಾರ ಸಂಘದಲ್ಲಿ ಹಣ ದುರುಪಯೋಗ ಮಾಡಿರುವ ಬಗ್ಗೆ.
3) ಬೆಂಗಳೂರು ನಗರದ ವಾರ್ಡ್ ನಂ.05 ರಲ್ಲಿನ ಯಲಹಂಕ ಶ್ರೀನಿವಾಸಪುರದ ಹೊನ್ನಪ್ಪ ಬಡಾವಣೆಗೆ ಕೊಳವೆ ಬಾವಿ ಹಾಗೂ ಒಳಚರಂಡಿ ವ್ಯವಸ್ಥೆ ಕಲ್ಪಿಸುವ ಬಗ್ಗೆ.
4) ಧಾರವಾಡದಿಂದ ಶಿರೂರು ಗ್ರಾಮಕ್ಕೆ ಬಸ್ ಸಂಚಾರ ಆರಂಭಿಸುವ ಬಗ್ಗೆ.
5) ಬಾಗಲಕೋಟೆ ಜಿಲ್ಲೆಯ ಸಸಾಲಟ್ಟಿ ಏತ ನೀರಾವರಿ ಯೋಜನೆಯನ್ನು ಪ್ರಾರಂಭಿಸುವ ಬಗ್ಗೆ.
6) ಕೊಡಗು ಜಿಲ್ಲೆ, ವಿರಾಜಪೇಟೆ ತಾಲ್ಲೂಕು, ಬಿಳಗುಂದ ಗ್ರಾಮದ ರಸ್ತೆಯ ಕಾಮಗಾರಿಯು ವಿಳಂಬವಾಗುತ್ತಿರುವ ಕುರಿತು.

## 3. ರಾಜ್ಯಪಾಲರ ಭಾಷಣಕ್ಕೆ ಸಂಬಂಧಿಸಿದ ವಂದನಾರ್ಪಣಾ ಪ್ರಸ್ತಾವ

ರಾಜ್ಯಪಾಲರ ಭಾಷಣಕ್ಕೆ ಸಂಬಂಧಿಸಿದ ವಂದನಾರ್ಪಣಾ ಪ್ರಸ್ತಾವದ ಮೇಲೆ ಚರ್ಚೆ, ಸರ್ಕಾರದ ಉತ್ತರ ಹಾಗೂ ಮತಕ್ಕೆ ಹಾಕುವುದು.

## 4. ವಿತ್ತೀಯ ಕಾರ್ಯಕಲಾಪಗಳು

ಅ) **ಶ್ರೀ ಹೆಚ್.ಡಿ.ಕುಮಾರಸ್ವಾಮಿ (ಮುಖ್ಯ ಮಂತ್ರಿಗಳು)** ಅವರು: 2018–19ನೇ ಸಾಲಿನ ಪೂರಕ ಅಂದಾಜುಗಳನ್ನು (ಎರಡನೇ ಕಂತು) ಮಂಡಿಸುವುದು.

ಆ) 2019–20ನೇ ಸಾಲಿನ ಆಯವ್ಯಯ ಅಂದಾಜುಗಳ ಮೇಲೆ ಸಾಮಾನ್ಯ ಚರ್ಚೆ, ಸರ್ಕಾರದ ಉತ್ತರ ಹಾಗೂ ಮತಕ್ಕೆ ಹಾಕುವುದು.

ಇ) 2018–19ನೇ ಸಾಲಿನ ಪೂರಕ ಅಂದಾಜುಗಳ (ಎರಡನೇ ಕಂತು) ಮೇಲೆ ಚರ್ಚೆ, ಸರ್ಕಾರದ ಉತ್ತರ ಹಾಗೂ ಮತಕ್ಕೆ ಹಾಕುವುದು.

... 3/ ..

## 5. ಶಾಸನ ರಚನೆ

### I. ವಿಧೇಯಕಗಳನ್ನು ಮಂಡಿಸುವುದು

**1. ಶ್ರೀ ಹೆಚ್.ಡಿ. ಕುಮಾರಸ್ವಾಮಿ (ಮಾನ್ಯ ಮುಖ್ಯಮಂತ್ರಿಗಳು) ಅವರು:–**

ಅ) 2019ನೇ ಸಾಲಿನ ಕರ್ನಾಟಕ ಧನವಿನಿಯೋಗ (ಲೇಖಾನುದಾನ) ವಿಧೇಯಕವನ್ನು ಮಂಡಿಸಲು ಅನುಮತಿ ಕೋರುವುದು;

ಆ) ಹಾಗೂ ವಿಧೇಯಕವನ್ನು ಮಂಡಿಸುವುದು.

**2. ಶ್ರೀ ಹೆಚ್.ಡಿ. ಕುಮಾರಸ್ವಾಮಿ (ಮಾನ್ಯ ಮುಖ್ಯಮಂತ್ರಿಗಳು) ಅವರು:–**

ಅ) 2019ನೇ ಸಾಲಿನ ಕರ್ನಾಟಕ ಧನವಿನಿಯೋಗ ವಿಧೇಯಕವನ್ನು ಮಂಡಿಸಲು ಅನುಮತಿ ಕೋರುವುದು;

ಆ) ಹಾಗೂ ವಿಧೇಯಕವನ್ನು ಮಂಡಿಸುವುದು.

### II. ವಿಧೇಯಕಗಳನ್ನು ಪರ್ಯಾಲೋಚಿಸುವುದು ಮತ್ತು ಅಂಗೀಕರಿಸುವುದು

**1. ಶ್ರೀ ಹೆಚ್.ಡಿ. ಕುಮಾರಸ್ವಾಮಿ (ಮಾನ್ಯ ಮುಖ್ಯಮಂತ್ರಿಗಳು) ಅವರು:–**

ಅ) 2019ನೇ ಸಾಲಿನ ಕರ್ನಾಟಕ ಧನವಿನಿಯೋಗ (ಲೇಖಾನುದಾನ) ವಿಧೇಯಕವನ್ನು ಪರ್ಯಾಲೋಚಿಸಬೇಕೆಂದು ಸೂಚಿಸುವುದು;

ಆ) ಹಾಗೂ ವಿಧೇಯಕವನ್ನು ಅಂಗೀಕರಿಸಬೇಕೆಂದು ಸೂಚಿಸುವುದು.

**2. ಶ್ರೀ ಹೆಚ್.ಡಿ. ಕುಮಾರಸ್ವಾಮಿ (ಮಾನ್ಯ ಮುಖ್ಯಮಂತ್ರಿಗಳು) ಅವರು:–**

ಅ) 2019ನೇ ಸಾಲಿನ ಕರ್ನಾಟಕ ಧನವಿನಿಯೋಗ ವಿಧೇಯಕವನ್ನು ಪರ್ಯಾಲೋಚಿಸಬೇಕೆಂದು ಸೂಚಿಸುವುದು;

ಆ) ಹಾಗೂ ವಿಧೇಯಕವನ್ನು ಅಂಗೀಕರಿಸಬೇಕೆಂದು ಸೂಚಿಸುವುದು.

## 6. ಪ್ರಶ್ನೋತ್ತರ

| | | |
|---|---|---|
| ಅ) ಸದನದಲ್ಲಿ ಉತ್ತರಿಸುವ ಪ್ರಶ್ನೆಗಳು | : | ನಾಲ್ಕನೇ ಪಟ್ಟಿ |
| ಆ) **ದಿನಾಂಕ: 12.02.2019ರ** ಎರಡನೇ ಪಟ್ಟಿಯಿಂದ ವರ್ಗಾವಣೆಗೊಂಡ **ಶ್ರೀ ಎಸ್.ಎ. ರವೀಂದ್ರನಾಥ** ಇವರ **ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ.21(16)** | : | ಮಾನ್ಯ ಭಾರಿ ಮತ್ತು ಮಧ್ಯಮ ನೀರಾವರಿ ಹಾಗೂ ಕನ್ನಡ ಮತ್ತು ಸಂಸ್ಕೃತಿ ಸಚಿವರು |
| ಇ) ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆಗಳು | : | ನಾಲ್ಕನೇ ಪಟ್ಟಿ |

... 4/ ..

## 7. ನಿಯಮ 69ರ ಮೇರೆಗೆ ಸಾರ್ವಜನಿಕ ಮಹತ್ವದ ಜರೂರು ವಿಷಯದ ಬಗ್ಗೆ ಅಲ್ಪ ಕಾಲಾವಧಿ ಚರ್ಚೆ

1. **ಶ್ರೀಯುತರುಗಳಾದ ಹೆಚ್. ಹಾಲಪ್ಪ, ವಿಶ್ವೇಶ್ವರ ಹೆಗಡೆ ಕಾಗೇರಿ, ಅರಗ ಜ್ಞಾನೇಂದ್ರ ಮತ್ತು ಎಸ್. ಕುಮಾರ ಬಂಗಾರಪ್ಪ ಇವರುಗಳು** – ಸಾಗರ ತಾಲ್ಲೂಕಿನ ಅರಳಗೋಡಿನಲ್ಲಿ ಕಾಣಿಸಿಕೊಂಡಿರುವ ಮಾರಣಾಂತಿಕ ಮಂಗನ ಕಾಯಿಲೆಯು ತಾಲ್ಲೂಕಿನಾದ್ಯಂತ ಹರಡುತ್ತಿದ್ದು ಅದನ್ನು ನಿಯಂತ್ರಿಸಲು ಅಗತ್ಯ ಕ್ರಮ ಕೈಗೊಳ್ಳುವ ಬಗ್ಗೆ ಚರ್ಚಿಸಲು ನೀಡಿರುವ ಸೂಚನೆಯ ಮೇಲೆ ಚರ್ಚೆ.

2. **ಶ್ರೀಯುತರುಗಳಾದ ಜೆ.ಸಿ. ಮಾಧುಸ್ವಾಮಿ, ಎಸ್. ಕುಮಾರ ಬಂಗಾರಪ್ಪ, ಎಸ್. ಸುರೇಶ್ ಕುಮಾರ್ ಮತ್ತು ಎಸ್.ವಿ. ರಾಮಚಂದ್ರ ಇವರುಗಳು** – ರಾಜ್ಯ ಸರ್ಕಾರವು ವಿವಿಧ ಇಲಾಖೆಗಳು ಹಾಗೂ ಪಂಚಾಯಿತಿಗಳಿಗೆ ಅಂತರ್‌ಜಾಲದ ವ್ಯವಸ್ಥೆ ಅಳವಡಿಸುವ ಸಲುವಾಗಿ ತೊಡಗಿಸಿರುವ ಸುಮಾರು 800ಕ್ಕಿಂತ ಹೆಚ್ಚು ಕೋಟಿ ಸರ್ಕಾರಿ ಹಣವು ದುರುಪಯೋಗ ಆಗಿರುವ ವಿಷಯದ ಬಗ್ಗೆ ಚರ್ಚಿಸಲು ನೀಡಿರುವ ಸೂಚನೆಯ ಮೇಲೆ ಚರ್ಚೆ.

3. **ಶ್ರೀಯುತರುಗಳಾದ ಎ.ಟಿ.ರಾಮಸ್ವಾಮಿ, ಕೆ.ಎಸ್.ಲಿಂಗೇಶ್ ಮತ್ತು ಡಿ.ಸಿ.ಗೌರಿಶಂಕರ್ ಇವರುಗಳು** – ಬೆಂಗಳೂರು ದಕ್ಷಿಣ ತಾಲ್ಲೂಕಿನ ಬಿ.ಎಂ.ಕಾವಲು ಗ್ರಾಮದ ಸರ್ವೆ ನಂ.137ರಲ್ಲಿರುವ 310 ಎಕರೆ 18 ಗುಂಟೆ ಸರ್ಕಾರಿ ಜಾಗ ಹಾಗೂ ಬೆಂಗಳೂರು ಉತ್ತರ ತಾಲ್ಲೂಕಿನ ಸಿದ್ಧಾಪುರ ಗ್ರಾಮದ ಸರ್ವೆ ನಂ.24ರಲ್ಲಿರುವ 4 ಎಕರೆ 18 ಗುಂಟೆ ಜಮೀನು ಮತ್ತು ಇತರೆ ಸರ್ಕಾರಿ ಜಮೀನುಗಳು ಖಾಸಗಿ ವ್ಯಕ್ತಿಗಳಿಗೆ ಸೃಷ್ಟಿತ ದಾಖಲೆಗಳ ಮೂಲಕ ಪರಭಾರೆಯಾಗುತ್ತಿರುವ ವಿಷಯದ ಬಗ್ಗೆ ಚರ್ಚಿಸಲು ನೀಡಿರುವ ಸೂಚನೆಯ ಮೇಲೆ ಚರ್ಚೆ.

4. **ಶ್ರೀಯುತರುಗಳಾದ ದೇವಾನಂದ ಪುಲಸಿಂಗ್ ಚವ್ಹಾಣ್, ಕೆ.ಎಸ್.ಲಿಂಗೇಶ್ ಮತ್ತು ಎಂ.ಶ್ರೀನಿವಾಸ ಇವರುಗಳು** – ವಿಜಯಪುರ ಜಿಲ್ಲೆಯ ತಾಂಡಾ ಸೇರಿದಂತೆ ಇನ್ನಿತರ ಜನಾಂಗಗಳ ಜನರು ಜೀವನ ನಿರ್ವಹಣೆಗಾಗಿ ಹೊರ ರಾಜ್ಯಕ್ಕೆ ಗುಳೆ ಹೋಗುತ್ತಿರುವ ವಿಷಯದ ಬಗ್ಗೆ ಚರ್ಚಿಸಲು ನೀಡಿರುವ ಸೂಚನೆಯ ಮೇಲೆ ಚರ್ಚೆ.

5. **ಶ್ರೀಯುತರುಗಳಾದ ಸಿ.ಟಿ. ರವಿ, ಕೆ.ಜಿ. ಬೋಪಯ್ಯ, ಜೆ.ಸಿ. ಮಾಧುಸ್ವಾಮಿ ಮತ್ತು ರಾಜುಗೌಡ (ನರಸಿಂಹನಾಯಕ) ಇವರುಗಳು** – ಅಬಿಡೆಂಟ್ ವಂಚನೆ ಪ್ರಕರಣವನ್ನು ಮುಚ್ಚಿಹಾಕಲು ಪ್ರಯತ್ನ ನಡೆಯುತ್ತಿದ್ದು, ಅಬಿಡೆಂಟ್, ಆಲಾ, ಇಂಜಾಜ್, ಅಜ್ಮೀರಾ ಇತ್ಯಾದಿ ಕಂಪನಿಗಳಿಂದ ವಂಚನೆಗೊಳಗಾದ ಜನರಿಗೆ ನ್ಯಾಯ ಮತ್ತು ಪರಿಹಾರ ದೊರಕಿಸಿಕೊಡುವ ನಿಟ್ಟಿನಲ್ಲಿ ಸದರಿ ಪ್ರಕರಣಗಳ ಕುರಿತು ಸಮಗ್ರ ತನಿಖೆ ನಡೆಸುವ ವಿಚಾರದ ಬಗ್ಗೆ ಚರ್ಚಿಸಲು ನೀಡಿರುವ ಸೂಚನೆಯ ಮೇಲೆ ಚರ್ಚೆ.

... 5/ ..

6. **ಶ್ರೀಯುತರುಗಳಾದ ಆಚಾರ್ ಹಾಲಪ್ಪ ಬಸಪ್ಪ, ಅಮರೇಗೌಡ.ಎಲ್.ಪಾಟೀಲ್ ಬಯ್ಯಾಪುರ್, ಪರಣ್ಣ ಈಶ್ವರಪ್ಪ ಮುನವಳ್ಳಿ, ಕೆ.ರಾಘವೇಂದ್ರ ಬಸವರಾಜ ಹಿಟ್ನಾಳ್ ಮತ್ತು ಬಸವರಾಜ್ ದಡೆಸೂಗೂರ್ ಇವರುಗಳು** – ಕೊಪ್ಪಳ ಏತ ನೀರಾವರಿ ಯೋಜನೆಯ ಅನುಷ್ಠಾನವು ವಿಳಂಬವಾಗುತ್ತಿರುವುದರಿಂದ ಅಲ್ಲಿನ ರೈತರಿಗೆ ತೊಂದರೆಯಾಗುತ್ತಿದ್ದು ಸದರಿ ಯೋಜನೆಗೆ ಅವಶ್ಯವಿರುವ ಅನುದಾನ ನೀಡುವ ವಿಚಾರದ ಬಗ್ಗೆ ಚರ್ಚಿಸಲು ನೀಡಿರುವ ಸೂಚನೆಯ ಮೇಲೆ ಚರ್ಚೆ.

7. **ಶ್ರೀಯುತರುಗಳಾದ ಡಿ.ಎಸ್. ಸುರೇಶ್, ಎಸ್.ವಿ. ರಾಮಚಂದ್ರ ಮತ್ತು ಬೆಳ್ಳಿ ಪ್ರಕಾಶ್ ಇವರುಗಳು** – ತರೀಕೆರೆ ತಾಲ್ಲೂಕಿನ ಜಂಬದಹಳ್ಳ ಹೋದಿರಾಯನ ಹಳ್ಳ ಪಥ ಪರಿವರ್ತನೆ ಯೋಜನೆ ಕಾಮಗಾರಿಯು ಪೂರ್ಣಗೊಳ್ಳದಿರುವುದರಿಂದ ಯೋಜನೆಯ ನೀರನ್ನು ಅವಲಂಬಿಸಿರುವ ರೈತರುಗಳು ಎದುರಿಸುತ್ತಿರುವ ಸಮಸ್ಯೆಯ ಬಗ್ಗೆ ಚರ್ಚಿಸಲು ನೀಡಿರುವ ಸೂಚನೆಯ ಮೇಲೆ ಚರ್ಚೆ.

8. **ಶ್ರೀಯುತರುಗಳಾದ ಸಿದ್ದು ಕೆ. ಸವದಿ, ಮಹಾದೇವಪ್ಪ ಶಿ.ಯಾದವಾಡ ಮತ್ತು ಅಭಯ ಪಾಟೀಲ ಇವರುಗಳು** – ರಾಜ್ಯಾದ್ಯಂತ ವ್ಯಾಪಿಸಿರುವ ಮರಳು ಮಾಫಿಯಾದಿಂದ ಸರ್ಕಾರದ ಬೊಕ್ಕಸಕ್ಕೆ ನಷ್ಟ ಉಂಟಾಗುತ್ತಿರುವುದು ಹಾಗೂ ಕಟ್ಟಡ ಕಾಮಗಾರಿಗಳಿಗೆ ಮರಳು ಸಿಗದೇ ತೊಂದರೆಯಾಗುತ್ತಿರುವ ಬಗ್ಗೆ ಚರ್ಚಿಸಲು ನೀಡಿರುವ ಸೂಚನೆಯ ಮೇಲೆ ಚರ್ಚೆ.

## 8. ಗಮನ ಸೆಳೆಯುವ ಸೂಚನೆಗಳು

1. **ಶ್ರೀ ಎಸ್. ಕುಮಾರ ಬಂಗಾರಪ್ಪ ಅವರು** – ಗ್ರಾಮ ಪಂಚಾಯಿತಿಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಗ್ರಾಮ ಪಂಚಾಯಿತಿ ಅಭಿವೃದ್ಧಿ ಅಧಿಕಾರಿಗಳು ತಮಗೆ ವಹಿಸಿರುವ ಕೆಲಸ ಕಾರ್ಯಗಳನ್ನು ಯಶಸ್ವಿಯಾಗಿ ನಿರ್ವಹಿಸಲು ಅನುಕೂಲವಾಗುವಂತೆ ಗ್ರಾಮ ಪಂಚಾಯಿತಿ ಅಭಿವೃದ್ಧಿ ಅಧಿಕಾರಿ ಹುದ್ದೆಗಳನ್ನು ಗ್ರೂಪ್ 'ಬಿ' (ಗೆಜೆಟೆಡ್) ವೃಂದಕ್ಕೆ ಸೇರ್ಪಡೆ ಮಾಡುವ ಬಗ್ಗೆ ಮಾನ್ಯ ಮುಖ್ಯಮಂತ್ರಿಗಳ ಗಮನ ಸೆಳೆಯುವುದು.

2. **ಶ್ರೀ ಅರವಿಂದ ಚಂದ್ರಕಾಂತ ಬೆಲ್ಲದ ಅವರು** – ರಾಜ್ಯದ ಸರ್ಕಾರಿ ಪ್ರಾಥಮಿಕ ಹಾಗೂ ಪ್ರೌಢಶಾಲೆಗಳಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳು ಕ್ರೀಡಾ ಕ್ಷೇತ್ರಗಳಲ್ಲಿ ಆಸಕ್ತಿ ಬೆಳೆಸಿಕೊಳ್ಳಲು ಅನುಕೂಲವಾಗುವಂತೆ ಹಾಗೂ ಅಂತರಾಷ್ಟ್ರೀಯ ಮಟ್ಟದ ಕ್ರೀಡಾಪಟುಗಳನ್ನು ತಯಾರು ಮಾಡುವ ನಿಟ್ಟಿನಲ್ಲಿ ಎನ್.ಎಸ್.ಎ. (ನ್ಯಾಷನಲ್ ಸ್ಪೋರ್ಟ್ಸ್ ಅಕಾಡೆಮಿ) ತರಬೇತಿದಾರರನ್ನು ಎಲ್ಲಾ ಆಟದ ಮೈದಾನಗಳಲ್ಲಿ ನೇಮಕ ಮಾಡುವ ಬಗ್ಗೆ ಮಾನ್ಯ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರ ಗಮನ ಸೆಳೆಯುವುದು.

... 6/ ..

3. **ಶ್ರೀ ನಿಸರ್ಗ ನಾರಾಯಣಸ್ವಾಮಿ ಎಲ್.ಎನ್. ಅವರು** – ಕೆಂಪೇಗೌಡ ಅಂತರರಾಷ್ಟ್ರೀಯ ವಿಮಾನ ನಿಲ್ದಾಣದ ನಿರ್ಮಾಣಕ್ಕಾಗಿ ಜಮೀನುಗಳನ್ನು ಕಳೆದುಕೊಂಡ ರೈತರುಗಳಿಗೆ ದೇವನಹಳ್ಳಿ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಸರ್ಕಾರಿ ಜಮೀನುಗಳನ್ನು ಗುರುತಿಸಿ ನಿವೇಶನಗಳನ್ನು ಹಂಚಿಕೆ ಮಾಡುವ ಬಗ್ಗೆ ಮಾನ್ಯ ಕಂದಾಯ ಸಚಿವರ ಗಮನ ಸೆಳೆಯುವುದು.

4. **ಶ್ರೀ ಅಬ್ಬಯ್ಯ ಪ್ರಸಾದ್ ಅವರು** – ಧಾರವಾಡ ಜಿಲ್ಲೆಯ ವ್ಯಾಪ್ತಿಯಲ್ಲಿ ಬರುವ ತಹಸೀಲ್ದಾರ್ ಕಛೇರಿಗಳಲ್ಲಿ ವಿಧವಾ ವೇತನ, ವೃದ್ಧಾಪ್ಯ ವೇತನ, ವಿಕಲಚೇತನ ಪಿಂಚಣಿ ಹಾಗೂ ಜಾತಿ ಮತ್ತು ಆದಾಯ ಪ್ರಮಾಣ ಪತ್ರಗಳ ವಿತರಣೆಯಲ್ಲಿ ಸಾರ್ವಜನಿಕರಿಗೆ ಆಗುತ್ತಿರುವ ತೊಂದರೆಗಳ ಬಗ್ಗೆ ಮಾನ್ಯ ಕಂದಾಯ ಸಚಿವರ ಗಮನ ಸೆಳೆಯುವುದು.

5. **ಶ್ರೀ ಗೂಳಿಹಟ್ಟಿ ಡಿ. ಶೇಖರ್ ಅವರು** – ಚಿತ್ರದುರ್ಗ ಜಿಲ್ಲೆ ಹೊಸದುರ್ಗ ತಾಲ್ಲೂಕಿನಲ್ಲಿ ನೂತನವಾಗಿ ನಿರ್ಮಿಸಿರುವ ವಿವಿಧ ಸಮಾಜದ ಸಮುದಾಯ ಭವನಗಳ ನಿರ್ವಹಣೆಯನ್ನು ಮತ್ತು ಅವುಗಳ ಆದಾಯವನ್ನು ಆಯಾಯ ಸಮಾಜದವರಿಗೆ ನೀಡುವ ಬಗ್ಗೆ ಮಾನ್ಯ ಸಮಾಜ ಕಲ್ಯಾಣ ಸಚಿವರ ಗಮನ ಸೆಳೆಯುವುದು.

6. **ಶ್ರೀ ವಿ.ಸುನೀಲ್ ಕುಮಾರ್ ಅವರು** – ಕೇಂದ್ರ ರಸ್ತೆ ನಿಧಿ ಯೋಜನೆಯಲ್ಲಿ ಅನುದಾನ ಬಿಡುಗಡೆಯಾದ ಎರಡನೇ ಹಂತದ ಕಾಮಗಾರಿಗಳ ಟೆಂಡರ್ ಪ್ರಕ್ರಿಯೆ ಪೂರ್ಣಗೊಳಿಸಿ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳುವ ಬಗ್ಗೆ ಮಾನ್ಯ ಲೋಕೋಪಯೋಗಿ ಸಚಿವರ ಗಮನ ಸೆಳೆಯುವುದು.

7. **ಶ್ರೀ ಮುನಿರತ್ನ ಅವರು** – ಬೆಂಗಳೂರು ಉತ್ತರ ತಾಲ್ಲೂಕಿನ ಯಶವಂತಪುರ ಹೋಬಳಿ ಜಾಲಹಳ್ಳಿ ಗ್ರಾಮದ ಸರ್ವೆ ನಂ.29ರಲ್ಲಿರುವ ಮುತ್ಯಾಲಮ್ಮ ದೇವರ ತೋಪು ಸರ್ಕಾರದ ಸ್ವತ್ತಾಗಿದ್ದು ಖಾಸಗಿ ವ್ಯಕ್ತಿಗಳು ಒತ್ತುವರಿ ಮಾಡಿಕೊಂಡಿರುವುದನ್ನು ತೆರವುಗೊಳಿಸಿ ಮುಜರಾಯಿ ಇಲಾಖೆಯ ವ್ಯಾಪ್ತಿಗೆ ಒಳಪಡಿಸುವ ಬಗ್ಗೆ ಮಾನ್ಯ ಕಂದಾಯ ಸಚಿವರ ಗಮನ ಸೆಳೆಯುವುದು.

8. **ಶ್ರೀ ಸಿದ್ದು ಕೆ. ಸವದಿ ಅವರು** – ಕರ್ನಾಟಕ ಕೈಮಗ್ಗ ಅಭಿವೃದ್ಧಿ ನಿಗಮದ ಅಡಿಯಲ್ಲಿ ನೇಯ್ಗೆ ಮಾಡುವ ನೇಕಾರರುಗಳಿಗೆ ಸಕಾಲದಲ್ಲಿ ನೂಲಿನ ಸರಬರಾಜಿಲ್ಲದೇ ನೇಕಾರರು ತೊಂದರೆ ಅನುಭವಿಸುತ್ತಿರುವುದು ಹಾಗೂ ನೇಕಾರರ ಸಾಲ ಮನ್ನಾ ಮಾಡುವ ಬಗ್ಗೆ ಮಾನ್ಯ ಮುಖ್ಯಮಂತ್ರಿಗಳ ಗಮನ ಸೆಳೆಯುವುದು.

9. **ಶ್ರೀ ಸಿ.ಟಿ. ರವಿ ಅವರು** – ಚಿಕ್ಕಮಗಳೂರು ನಗರ ಉಪ್ಪಳ್ಳಿ ಬಡಾವಣೆಯ ನಿವಾಸಿಯಾದ ಮೊಹಮದ್ ಅನ್ವರ್ ಅವರನ್ನು ಹತ್ಯೆಗೈದು ಸುಮಾರು 6 ತಿಂಗಳು ಕಳೆದಿದ್ದು, ದುಷ್ಕರ್ಮಿಗಳನ್ನು ಬಂಧಿಸುವ ನಿಟ್ಟಿನಲ್ಲಿ ವಿಶೇಷ ತನಿಖಾ ತಂಡವನ್ನು ರಚಿಸಿ ತನಿಖೆಯನ್ನು ಚುರುಕುಗೊಳಿಸುವ ಬಗ್ಗೆ ಮಾನ್ಯ ಗೃಹ ಸಚಿವರ ಗಮನ ಸೆಳೆಯುವುದು.

... 7/ ..

10. **ಶ್ರೀ ಸುನೀಲ್ ಬಿಳಿಯಾ ನಾಯ್ಕ್ ಅವರು** – ಭಟ್ಕಳ ವಿಧಾನ ಸಭಾ ಕ್ಷೇತ್ರದ ಹೊನ್ನಾವರ ತಾಲ್ಲೂಕಿನ ಮಂಕಿ ಪೋಲಿಸ್ ಠಾಣೆ ವ್ಯಾಪ್ತಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಸಬ್ ಇನ್ಸ್‌ಪೆಕ್ಟರ್‌ರವರ ದುರ್ವರ್ತನೆಯಿಂದ ಸಾರ್ವಜನಿಕರು ಆತಂಕಕ್ಕೆ ಒಳಗಾಗಿರುವ ಬಗ್ಗೆ ಮಾನ್ಯ ಗೃಹ ಸಚಿವರ ಗಮನ ಸೆಳೆಯುವುದು.

11. **ಶ್ರೀ ಡಿ.ವೇದವ್ಯಾಸ ಕಾಮತ್ ಅವರು** – ಸ್ಮಾರ್ಟ್ ಸಿಟಿ ಯೋಜನೆಯನ್ನು ರಾಜ್ಯದ ಆರು ಜಿಲ್ಲೆಗಳಲ್ಲಿ ಅನುಷ್ಠಾನಗೊಳಿಸುವಲ್ಲಿ ಉಂಟಾಗುತ್ತಿರುವ ಸಮಸ್ಯೆಗಳ ಬಗ್ಗೆ ಮಾನ್ಯ ಉಪ ಮುಖ್ಯಮಂತ್ರಿಗಳ ಗಮನ ಸೆಳೆಯುವುದು.

12. **ಶ್ರೀ ಎಸ್.ಎ.ರಾಮದಾಸ್ ಅವರು** – ಕರ್ನಾಟಕದಲ್ಲಿ ಎಂ.ಬಿ.ಬಿ.ಎಸ್. ಪದವಿ ಪಡೆದಿರುವ ವಿದ್ಯಾರ್ಥಿಗಳು "ಕಡ್ಡಾಯ ಗ್ರಾಮೀಣ ಸೇವೆ" ಸಲ್ಲಿಸಬೇಕೆಂದು ಜಾರಿಗೆ ತರಲಾಗಿರುವ ನಿಯಮವು ಪರಿಣಾಮಕಾರಿಯಾಗಿ ಅನುಷ್ಠಾನವಾಗದೇ ಇರುವ ಬಗ್ಗೆ ಮಾನ್ಯ ವೈದ್ಯಕೀಯ ಶಿಕ್ಷಣ ಸಚಿವರ ಗಮನ ಸೆಳೆಯುವುದು.

13. **ಶ್ರೀ ಅಶ್ವಿನ್ ಕುಮಾರ್.ಎಂ. ಅವರು** – ತಿ.ನರಸೀಪುರ ವಿಧಾನ ಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ರೈತರುಗಳಿಂದ ಭತ್ತವನ್ನು ಬೆಂಬಲ ಬೆಲೆ ನೀಡಿ ಖರೀದಿಸುವ ಬಗ್ಗೆ ಮಾನ್ಯ ಆಹಾರ ಮತ್ತು ನಾಗರೀಕ ಸರಬರಾಜು ಹಾಗೂ ಗ್ರಾಹಕ ವ್ಯವಹಾರಗಳು, ಅಲ್ಪಸಂಖ್ಯಾತರ ಕಲ್ಯಾಣ ಹಾಗೂ ವಕ್ಫ್ ಸಚಿವರ ಗಮನ ಸೆಳೆಯುವುದು.

14. **ಶ್ರೀ ತನ್ವೀರ್ ಸೇಠ್ ಅವರು** – 2018–19ನೇ ಸಾಲಿನಲ್ಲಿ ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಗೆ ಆಯವ್ಯಯದಲ್ಲಿ ಮೀಸಲಿರಿಸಿರುವ ಅನುದಾನವನ್ನು ಯೋಜನೆವಾರು ಬಿಡುಗಡೆ ಮಾಡಲು ಕೈಗೊಂಡಿರುವ ಕ್ರಮದ ಬಗ್ಗೆ ಮಾನ್ಯ ಆಹಾರ ಮತ್ತು ನಾಗರೀಕ ಸರಬರಾಜು ಹಾಗೂ ಗ್ರಾಹಕ ವ್ಯವಹಾರಗಳು, ಅಲ್ಪಸಂಖ್ಯಾತರ ಕಲ್ಯಾಣ ಹಾಗೂ ವಕ್ಫ್ ಸಚಿವರ ಗಮನ ಸೆಳೆಯುವುದು.

15. **ಶ್ರೀ ಸಿ.ಸಿ.ಪಾಟೀಲ್ ಅವರು** – ನರಗುಂದ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಶಾಲಾ ಕೊಠಡಿಗಳ ನಿರ್ಮಾಣ ಕಾರ್ಯವನ್ನು ತ್ವರಿತವಾಗಿ ಪೂರ್ಣಗೊಳಿಸುವ ಬಗ್ಗೆ ಮಾನ್ಯ ಮುಖ್ಯಮಂತ್ರಿಗಳ ಗಮನ ಸೆಳೆಯುವುದು.

16. **ಶ್ರೀ ಎ.ಎಸ್.ಜಯರಾಮ್ (ಮಸಾಲ ಜಯರಾಮ್) ಅವರು** – ತುರುವೇಕೆರೆ ಕ್ಷೇತ್ರ ವ್ಯಾಪ್ತಿಯಲ್ಲಿ ನರೇಗಾ ಯೋಜನೆಗೆ ಸಂಬಂಧಿಸಿದಂತೆ ಬಾಕಿ ಇರುವ 2017–18ನೇ ಸಾಲಿನ ಸಾಮಗ್ರಿ ಬಿಲ್ಲುಗಳನ್ನು ಪಾವತಿ ಮಾಡುವ ಬಗ್ಗೆ ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರ ಗಮನ ಸೆಳೆಯುವುದು.

17. **ಶ್ರೀ ಉಮಾನಾಥ ಎ. ಕೋಟ್ಯಾನ್ ಅವರು** – ದಕ್ಷಿಣ ಕನ್ನಡ ಮತ್ತು ಉಡುಪಿ ಹಾಗೂ ಕಾರವಾರ ಜಿಲ್ಲೆಗಳಲ್ಲಿ ಕೆಂಪು ಕಲ್ಲುಗಳನ್ನು ತೆಗೆಯಲು ವಿಧಿಸಿರುವ ನಿರ್ಬಂಧಗಳನ್ನು ಸಡಿಲಿಸುವ ಬಗ್ಗೆ ಮಾನ್ಯ ಗಣಿ ಮತ್ತು ಭೂ ವಿಜ್ಞಾನ ಸಚಿವರ ಗಮನ ಸೆಳೆಯುವುದು.

... 8/ ..

## 9. ಖಾಸಗಿ ಸದಸ್ಯರ ಕಾರ್ಯಕಲಾಪಗಳು

**ಶ್ರೀ ಅಭಯ್ ಪಾಟೀಲ್ ಅವರು ಈ ಕೆಳಕಂಡ ನಿರ್ಣಯಗಳನ್ನು ಮಂಡಿಸುವುದು:**

1) "ಬೆಳಗಾವಿ ಹಾಗೂ ಉತ್ತರ ಕರ್ನಾಟಕದ ಪರಿಸರದಲ್ಲಿ ಹಲವಾರು ಶೈಕ್ಷಣಿಕ ವಿದ್ಯಾ ಸಂಸ್ಥೆಗಳು ಇದ್ದು, ಇಲ್ಲಿ ಹೆಚ್ಚು ವಿದ್ಯಾವಂತ ಯುವಕರು ನಿರುದ್ಯೋಗಿಗಳಾಗಿದ್ದು, ಉದ್ಯೋಗವನ್ನು ಅರಸಿ ಇತರ ರಾಜ್ಯಗಳಿಗೆ ವಲಸೆ ಹೋಗುತ್ತಿರುವುದನ್ನು ತಪ್ಪಿಸಲು ಹಾಗೂ ಉತ್ತರ ಕರ್ನಾಟಕದ ಸಮಗ್ರ ಅಭಿವೃದ್ಧಿಗಾಗಿ ಬೆಳಗಾವಿಯಲ್ಲಿ ಒಂದು ಬೃಹತ್ ಪ್ರಮಾಣದ ಐಟಿ ಪಾರ್ಕ್‌ನ್ನು ಸ್ಥಾಪಿಸುವುದು ಅವಶ್ಯಕವಾಗಿದ್ದು, ರಾಷ್ಟ್ರೀಯ ಹೆದ್ದಾರಿ ಸಂಖ್ಯೆ:4 ಕ್ಕೆ ಹೊಂದಿಕೊಂಡಿರುವ ಬೆಳಗಾವಿ ಗ್ರಾಮದ ಸರ್ವೇ ನಂ.1304 ರಿಂದ 1349 ರವರೆಗೆ ಇರುವ ಸುಮಾರು 744 ಎಕರೆ 34 ಗುಂಟೆಯಷ್ಟು ಜಮೀನು ರಾಜ್ಯ ಸರ್ಕಾರಕ್ಕೆ ಸೇರಿದ್ದು, ಈ ಸ್ಥಳದಲ್ಲಿ ಬೃಹತ್ ಪ್ರಮಾಣದ ಐಟಿ ಪಾರ್ಕ್‌ನ್ನು ಸ್ಥಾಪಿಸಲು ರಾಜ್ಯ ಸರ್ಕಾರವು ಕೂಡಲೇ ಕ್ರಮ ಕೈಗೊಳ್ಳಬೇಕೆಂದು ಈ ಸದನವು ಒತ್ತಾಯಿಸುತ್ತದೆ."

2) "ನಮ್ಮ ದೇಶದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಹೋರಾಡಿರುವ ಗಣ್ಯ ವ್ಯಕ್ತಿಗಳ ಹಾಗೂ ಅವರ ಐತಿಹಾಸಿಕ ಸ್ಮಾರಕಗಳನ್ನು ನಿರ್ಮಿಸುವ ಮುಖಾಂತರ ಇಂದಿನ ಯುವ ಪೀಳಿಗೆಗೆ ಅದನ್ನು ಪರಿಚಯಿಸುವುದು ಹಾಗೂ ಸ್ವಾತಂತ್ರ್ಯ ಹೋರಾಟಗಾರರನ್ನು ಸ್ಮರಿಸಿಕೊಳ್ಳುವುದು ಈ ಸಂದರ್ಭದಲ್ಲಿ ಅತ್ಯಂತ ಅವಶ್ಯಕವಾಗಿರುತ್ತದೆ. ಆದ್ದರಿಂದ ಈ ವೀರಯೋಧರುಗಳ ಜೀವನ ಚರಿತ್ರೆಗಳನ್ನು ಮಾದರಿ ರೂಪದಲ್ಲಿ ಸ್ಥಾಪಿಸುವ, ವಿಜ್ಞಾನಿಗಳ ಮತ್ತು ಸ್ವತಂತ್ರ ಭಾರತಕ್ಕೆ ಹೋರಾಡಿದ ಮಹಾನ್ ವ್ಯಕ್ತಿಗಳ ಜನ್ಮಸ್ಥಳ, ಕರ್ಮಭೂಮಿ, ಜೀವನ ಚರಿತ್ರೆ ಹಾಗೂ ಸ್ಮಾರಕಗಳ ಪ್ರತಿರೂಪತೆಯ ಪಳೆಯುಳಿಕೆಗಳನ್ನು ಒಂದೇ ಪರಿಸರದಲ್ಲಿ ಸ್ಥಾಪಿಸುವುದರಿಂದ ಇಂದಿನ ಯುವಕರಲ್ಲಿ ದೇಶಾಭಿಮಾನವನ್ನು ಹೆಚ್ಚಿಸುವುದರ ಜೊತೆಗೆ ಉತ್ತರ ಕರ್ನಾಟಕದ ಭಾಗದಲ್ಲಿ ಬೆಳಗಾವಿಯನ್ನು ಮಾದರಿ ಪ್ರವಾಸೋದ್ಯಮ ಕೇಂದ್ರವನ್ನಾಗಿ ಅಭಿವೃದ್ಧಿಪಡಿಸಲು ಅವಕಾಶವಾಗುವುದರಿಂದ ಬೆಳಗಾವಿ ತಾಲ್ಲೂಕಿನ ಮಚ್ಚೆ ಗ್ರಾಮದ ಸರ್ವೇ ನಂ.559, 560, 561 ಹಾಗೂ 583ರಲ್ಲಿರುವ ಸುಮಾರು 317 ಎಕರೆ ಸರ್ಕಾರಿ ಜಮೀನಿನಲ್ಲಿ ರಾಜ್ಯ ಮತ್ತು ಕೇಂದ್ರ ಸರ್ಕಾರದ ಸಂಯುಕ್ತ ಅನುದಾನದಲ್ಲಿ ಐತಿಹಾಸಿಕ ಸ್ಮಾರಕಗಳ ಮಾದರಿಗಳನ್ನು (ರಿಪ್ಲಿಕಾಗಳನ್ನು) ನಿರ್ಮಿಸಬೇಕೆಂದು ಈ ಸದನವು ಒತ್ತಾಯಿಸುತ್ತದೆ."

**ಎಂ.ಕೆ.ವಿಶಾಲಾಕ್ಷಿ**
**ಕಾರ್ಯದರ್ಶಿ(ಪ್ರ)**

---

ವಿಧಾನಸಭೆಯ ಕಾರ್ಯಕಲಾಪಗಳ ಪಟ್ಟಿಯನ್ನು ಅಂತರ್ಜಾಲದ ಈ ವಿಳಾಸದಲ್ಲಿ ಪಡೆದುಕೊಳ್ಳಬಹುದು
***http://kla.kar.nic.in/assembly/lob/lob.htm***